## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮುನಿರಾಜುಗೌಡ ಪಿ.ಎಂ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1972** |
| ಉತ್ತರಿಸಬೇಕಾದ ದಿನಾಂಕ | : | 16.03.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2019-20 ಮತ್ತು 2020-21 ನೇ ಸಾಲುಗಳಲ್ಲಿ ರಾಜ್ಯದಲ್ಲಿ ಸುರಿದ ಭಾರಿ ಮಳೆಯಿಂದ ಉಂಟಾದ ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಪ್ರವಾಹದಿಂದ ಮನೆಗಳನ್ನು ಕಳೆದು ಕೊಂಡವರಿಗೆ ಪುನರ್ ವಸತಿ ಕಲ್ಪಿಸಲು ಸರ್ಕಾರದಿಂದ ವಸತಿ ಯೋಜನೆಗಳನ್ನು ಕೈಗೊಳ್ಳಲಾಗಿದೆಯೇ ; | 2019-20 ಮತ್ತು 2020-21 ನೇ ಸಾಲಿನಲ್ಲಿ ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಸುರಿದ ಭಾರಿ ಮಳೆ/ ಪ್ರವಾಹದಿಂದ ಹಾನಿಗೊಳಗಾದ ಫಲಾನುಭವಿಗಳೇ ಸ್ವಂತವಾಗಿ ನಿರ್ಮಿಸಿಕೊಳ್ಳುತ್ತಿದ್ದಾರೆ. |
| ಆ) | ಕೈಗೊಂಡಿದ್ದಲ್ಲಿ ವಸತಿ ಯೋಜನೆಯ ಸ್ಥಳ, ಅಂದಾಜು ವೆಚ್ಚ, ನಿರ್ಮಾಣ ಮಾಡುತ್ತಿರುವ ವಸತಿ ಘಟಕಗಳ ಸಂಖ್ಯೆ, ಇಲ್ಲಿಯವರೆಗೆ ಆಗಿರುವ ವೆಚ್ಚ, ವಸತಿ ಯೋಜನೆಯ ಇತ್ತೀಚಿನ ಸ್ಥಿತಿಗತಿಗಳ ಮಾಹಿತಿಯೊಂದಿಗೆ (ಸಂಪೂರ್ಣ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ವಇ 78 ಹೆಚ್ಎಎಂ 2019, ದಿನಾಂಕ:14.08.2019 ರನ್ವಯ ಮಳೆ/ಪ್ರವಾಹದಿಂದ ಹಾನಿಗೊಳಗಾದ ಫಲಾನುಭವಿಗಳೇ ಸ್ವಂತವಾಗಿ ನಿರ್ಮಿಸಿ ಕೊಳ್ಳುತ್ತಿದ್ದಾರೆ.<br><br>ಹಾನಿಗೊಳಗಾದ ಮನೆಗಳ ವರ್ಗವನ್ನು ಕೆಳಕಂಡಂತೆ ವಿಂಗಡಿಸಿ ಪರಿಹಾರಧನವನ್ನು ನಿಗದಿಪಡಿಸಿದೆ. |

| ಕ್ರ. ಸಂ. | ಹಾನಿಯಾದ ಮನೆಯ ಪ್ರಮಾಣ | ಮನೆಯ ವರ್ಗ | ನಿಗದಿಪಡಿಸಲಾದ ಪರಿಹಾರ ಮೊತ್ತ |
|---|---|---|---|
| 1 | ಶೇ. 75ಕ್ಕಿಂತ ಹೆಚ್ಚು | ಸಂಪೂರ್ಣ ಮನೆ ಹಾನಿ-ಎ | ರೂ.5.00 ಲಕ್ಷಗಳು |
| 2 | ಶೇ.25 ರಿಂದ 75 ರಷ್ಟು | ಭಾಗಶಃ ಮನೆ ಹಾನಿ (ಪುನರ್ ನಿರ್ಮಾಣ)-ಬಿ2 | ರೂ.5.00 ಲಕ್ಷಗಳು |
| 3 | | ಭಾಗಶಃ ಮನೆ ಹಾನಿ (ದುರಸ್ತಿ)-ಬಿ1 | ರೂ.3.00 ಲಕ್ಷಗಳು |
| 4 | ಶೇ.15 ರಿಂದ 25 ರಷ್ಟು | ಅಲ್ಪ ಸ್ವಲ್ಪ ಮನೆ ಹಾನಿ-ಸಿ | ರೂ.50,000/-ಗಳು |
| 5 | ಅನಧಿಕೃತ ಮನೆಗಳು (ಇರುವ ಜಾಗದಲ್ಲಿಯೇ ನಿರ್ಮಿಸಿ ಕೊಳ್ಳುವ ಮನೆಗಳು) | | ರೂ.1.00 ಲಕ್ಷ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 2019-20 ಮತ್ತು 2020-21 ನೇ ಸಾಲಿನಲ್ಲಿ ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಸುರಿದ ಭಾರಿ ಮಳೆ/ ಪ್ರವಾಹದಿಂದ ಒಟ್ಟು 174108 ಮನೆಗಳು ಹಾನಿಗೊಳಗಾಗಿರುವುದಾಗಿ ಜಿಲ್ಲಾಧಿಕಾರಿಗಳು ಅನುಮೋದಿಸಿದ್ದು, ವರ್ಗವಾರು, ವರ್ಷವಾರು ವಿವರ ಕೆಳಕಂಡಂತಿದೆ. |

| ಹಾನಿಯಾದ ಮನೆಯ ವರ್ಗ | ವರ್ಷ 2019-20 | ವರ್ಷ 2020-21 | ಒಟ್ಟು ಮನೆಗಳು |
|---|---|---|---|
| ಸಂಪೂರ್ಣ-ಎ | 10503 | 1126 | 11629 |
| ಭಾಗಶಃ-ಪುನರ್ ನಿರ್ಮಾಣ-ಬಿ2 | 26204 | 6276 | 32480 |
| ಭಾಗಶಃ-ದುರಸ್ಥಿ-ಬಿ1 | 2934 | 939 | 3873 |
| ಅಲ್ಪಸ್ವಲ್ಪ-ಸಿ | 93454 | 30244 | 123698 |
| ಅನಧಿಕೃತ ಮನೆ | 1281 | 173 | 1454 |
| ಭಾಗಶಃ-ಬಿ | 560 | 414 | 974 |
| **ಒಟ್ಟು** | **134936** | **39172** | **174108** |

2019 ನೇ ಸಾಲಿನ ಆಗಸ್ಟ ಮಾಹೆಯಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಉಂಟಾದ ಮಳೆ/ಪ್ರವಾಹದಿಂದ ಹಾನಿಗೊಳಗಾದ ಮನೆಗಳ ವಿವರವನ್ನು ವಿವಿಧ ಕಾರಣಗಳಿಂದ ನಿಗದಿತ ಅವಧಿಯಲ್ಲಿ ದಾಖಲಿಸಲು ಸಾಧ್ಯವಾಗದ 7600 ಅಧಿಕೃತ ಮನೆಗಳ ಮಾಹಿತಿಯನ್ನು ತಂತ್ರಾಂಶದಲ್ಲಿ ನಮೂದಿಸಲು ಸರ್ಕಾರದ ಆದೇಶ ದಿನಾಂಕ:10.12.2021 ರಲ್ಲಿ ಅವಕಾಶ ಕಲ್ಪಿಸಲಾಗಿದ್ದು, ಅದರಂತೆ 7600 ಮನೆಗಳ ಪೈಕಿ 4933 ಮನೆಗಳನ್ನು ತಂತ್ರಾಂಶದಲ್ಲಿ ತಹಶೀಲ್ದಾರರು ನಮೂದಿಸಿದ್ದು, 2400 ಮನೆಗಳನ್ನು ಜಿಲ್ಲಾಧಿಕಾರಿಗಳು ಅನುಮೋದಿಸಿರುತ್ತಾರೆ.

2019-20 ಮತ್ತು 2020-21 ನೇ ಸಾಲಿನಲ್ಲಿ ಹಾನಿಗೊಳಗಾದ ಒಟ್ಟು 174108 ಮನೆಗಳ ಪೈಕಿ ಒಟ್ಟು 44109 ಮನೆಗಳ ಪುನರ್ ನಿರ್ಮಾಣಕ್ಕೆ ಜಿಲ್ಲಾಧಿಕಾರಿಗಳು ಅನುಮೋದಿಸಿರುತ್ತಾರೆ. ಈ ಪೈಕಿ 21,337 ಮನೆಗಳು ಪೂರ್ಣಗೊಂಡಿದ್ದು, 15,904 ಮನೆಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿದ್ದು, 6,858 ಮನೆಗಳು ವಿವಿಧ ಕಾರಣಗಳಿಂದ ಬ್ಲಾಕ್ ಆಗಿರುತ್ತವೆ. ಉಳಿದ 10 ಮನೆಗಳು ಪ್ರಾರಂಭವಾಗಬೇಕಿದೆ. ವರ್ಷವಾರು ವಿವರ ಕೆಳಕಂಡಂತಿದೆ.

| ವರ್ಷ | ಹಾನಿಯಾದ ಮನೆಯ ವರ್ಗ | ಜಿಲ್ಲಾಧಿಕಾರಿಗಳು ಅನುಮೋದಿಸಿರುವ ಒಟ್ಟು ಮನೆಗಳು | ಪೂರ್ಣಗೊಂಡ ಮನೆಗಳು | ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾಗದ ಮನೆಗಳು | ಬ್ಲಾಕ್ ಆದ ಮನೆಗಳು |
|---|---|---|---|---|---|---|
| 2019 | ಎ | 10503 | 5832 | 2765 | 2 | 1904 |
| | ಬಿ | 26204 | 14829 | 8306 | 7 | 3062 |
| **2019 ಒಟ್ಟು** | | **36707** | **20661** | **11071** | **9** | **4966** |
| 2020 | ಎ | 1126 | 94 | 625 | 0 | 407 |
| | ಬಿ | 6276 | 582 | 4208 | 1 | 1485 |
| **2020 ಒಟ್ಟು** | | **7402** | **676** | **4833** | **1** | **1892** |
| **ಅಂತೂ ಒಟ್ಟು** | | **44109** | **21337** | **15904** | **10** | **6858** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಹಾನಿಗೊಳಗಾಗಿರುವ ಒಟ್ಟು 174108 ಮನೆಗಳಲ್ಲಿ 127571 ಮನೆಗಳನ್ನು ಸಂತ್ರಸ್ಥರು ದುರಸ್ಥಿ ಮಾಡಿಕೊಳ್ಳುತ್ತಿದ್ದು, 1454 ಮನೆಗಳು ಅನಧಿಕೃತವಾಗಿದ್ದು, ಸದರಿ ಮನೆಗಳಿಗೆ ಸರ್ಕಾರದ ಆದೇಶ ಸಂಖ್ಯೆ:ವಇ 78 ಹೆಚ್‌ಎಎಂ 2019(ಭಾಗ-1), ದಿನಾಂ: 16.09.2019 ರಂತೆ ಪೂರ್ಣ ಪ್ರಮಾಣದ ಪರಿಹಾರ ಧನವನ್ನು ಫಲಾನುಭವಿಗಳ ಖಾತೆಗೆ ಬಿಡುಗಡೆ ಮಾಡಲಾಗಿದೆ. ಭಾಗಶಃ ಹಾನಿಗೊಳಗಾದ 974 ಮನೆಗಳ ಬಗ್ಗೆ ಪುನರ್ ನಿರ್ಮಾಣ/ದುರಸ್ಥಿ ಮಾಡುವ ಕುರಿತು ತಹಶೀಲ್ದಾರರು/ಜಿಲ್ಲಾಧಿಕಾರಿಗಳು ವರ್ಗ ವಿಂಗಡಣೆ ಮಾಡಬೇಕಾಗಿರುತ್ತದೆ.<br><br>ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡು ಪ್ರಗತಿಯಲ್ಲಿರುವ ಮನೆಗಳಿಗೆ ಜಿಲ್ಲಾಧಿಕಾರಿಗಳು ಮತ್ತು ತಹಶೀಲ್ದಾರರು ನೀಡಿರುವ ಅನುದಾನ ದೃಢೀಕರಣದ(Payment Certification) ಆಧಾರದ ಮೇಲೆ ಹಾಗೂ DBT ಆಧಾರ್ ಆಧಾರಿತವಾಗಿ ಈವರೆಗೂ 2019 ರ ಪುನರ್ವಸತಿ ಯೋಜನೆಯಡಿ ರೂ.2034.72 ಕೋಟಿ ಹಾಗೂ 2020 ರ ಪುನರ್ವಸತಿ ಯೋಜನೆಯಡಿ ರೂ.215.57 ಕೋಟಿ ಒಟ್ಟಾರೆ ರೂ.2250.29 ಕೋಟಿಗಳ ಪರಿಹಾರಧನ ಬಿಡುಗಡೆ ಮಾಡಲಾಗಿರುತ್ತದೆ. |
| ಇ) | ಕಳೆದ 2 ವರ್ಷಗಳಲ್ಲಿ ಮಳೆಯಿಂದ ಉಂಟಾದ ಪ್ರವಾಹದಿಂದಾಗಿ ವಾಸನ ಮನೆಗಳನ್ನು ಕಳೆದು ಕೊಂಡು ನಿರಾಶ್ರಿತರಾದ ಎಷ್ಟು ಕುಟುಂಬಗಳಿಗೆ ಎಲ್ಲೆಲ್ಲಿ ವಸತಿ ಗೃಹಗಳನ್ನು ಹಂಚಿಕೆ ಮಾಡಿ ವಾಸಕ್ಕೆ ಬಿಟ್ಟು ಕೊಡಲಾಗಿದೆ ? (ವಿವರ ನೀಡುವುದು) | 2019-20 ಮತ್ತು 2020-21 ರಲ್ಲಿ ರಾಜ್ಯಾದ್ಯಂತ ಮಳೆ/ಪ್ರವಾಹದಿಂದ ಹಾನಿಗೊಳಗಾದ ಮನೆಗಳನ್ನುಕಂದಾಯ ಇಲಾಖೆಯಿಂದ ಸಮೀಕ್ಷೆ ನಡೆಸಿದ್ದು, ಹಾನಿಗೊಳಗಾದ ಮನೆಗಳ ಹಾನಿ ಪ್ರಮಾಣಕ್ಕೆ ಅನುಗುಣವಾಗಿ ಮನೆಗಳ ವರ್ಗ ವಿಂಗಡಿಸಿ ತಹಶೀಲ್ದಾರ್ ರವರು ನಿಗಮದ ತಂತ್ರಾಂಶದಲ್ಲಿ ನಮೂದಿಸಿರುವ 184911 ಮನೆಗಳ ಪೈಕಿ 176508 ಮನೆಗಳನ್ನು ಜಿಲ್ಲಾಧಿಕಾರಿಗಳು ಅನುಮೋದಿಸಿರುತ್ತಾರೆ.<br><br>ಸರ್ಕಾರದ ಆದೇಶ/ಮಾರ್ಗಸೂಚಿಗಳನ್ವಯ ನೆರೆ ಹಾವಳಿಗೆ ತುತ್ತಾಗಿ ಹಾನಿಗೊಳಗಾದ ಮನೆಗಳ ಹಾನಿ ಪ್ರಮಾಣವನ್ನು ಸಂಬಂಧಪಟ್ಟ ಕಂದಾಯ ಅಧಿಕಾರಿಗಳು ಸಮೀಕ್ಷೆ ಮಾಡಿ ಹಾನಿಗೊಳಗಾದ ಮನೆಯ ಹಾನಿ ಪ್ರಮಾಣಕ್ಕೆ ಅನುಗುಣವಾಗಿ ಮನೆಯ ವರ್ಗವನ್ನು ಎ, ಬಿ2, ಬಿ1 ಮತ್ತು ಸಿ ಎಂದು ವಿಂಗಡಿಸಿ, ತಹಸೀಲ್ದಾರ್ ರವರು ತಂತ್ರಾಂಶದಲ್ಲಿ ನಮೂದಿಸಿ, ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಫಲಾನುಭವಿಗಳು ನಿರ್ಮಿಸಿರುವ ಮನೆಗಳ ವಿವಿಧ ಹಂತಗಳ ಜಿಪಿಎಸ್ ಛಾಯಾಚಿತ್ರಗಳನ್ನು ಗ್ರಾಮೀಣ ಪ್ರದೇಶದಲ್ಲಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ಹಾಗೂ ನಗರ ಪ್ರದೇಶದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳು ಪುನರ್ವಸತಿ ಮೊಬೈಲ್ **ಆ್ಯಪ್** ಮೂಲಕ ಜಿಪಿಎಸ್ ಮಾಡಿದ ನಂತರ ತಹಶೀಲ್ದಾರ್ ರವರು ಪರಿಶೀಲಿಸಿ, ಅರ್ಹಗೊಳಿಸಿ (Audit), ಅನುದಾನ ದೃಢೀಕರಣ (Payment Certification) ನೀಡಿದ ಪ್ರಗತಿಯಲ್ಲಿರುವ ಎಲ್ಲಾ ಮನೆಗಳಿಗೆ ಪ್ರಗತಿಗೆ ಅನುಗುಣವಾಗಿ DBT ಆಧಾರ್ ಆಧಾರಿತವಾಗಿ ನೇರವಾಗಿ ಫಲಾನುಭವಿಗಳ ಖಾತೆಗೆ ಪರಿಹಾರಧನ ಪಾವತಿಸಲಾಗುತ್ತಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಸರ್ಕಾರದ ಆದೇಶ ಸಂಖ್ಯೆ:ವಇ 78 ಹೆಚ್‌ಎಎಂ 2019, ದಿನಾಂಕ:14.08.2019 ರನ್ವಯ ಮಳೆ/ಪ್ರವಾಹದಿಂದ ಹಾನಿಗೊಳಗಾದ ಮನೆಗಳ ಪುನರ್ ನಿರ್ಮಾಣವನ್ನು ಫಲಾನುಭವಿಗಳೇ ಸ್ವತಃ ಮಾಡುತ್ತಿರುವುದರಿಂದ ಸರ್ಕಾರದಿಂದ ವಸತಿ ಗೃಹಗಳನ್ನು ನಿರ್ಮಿಸಿ ಹಂಚಿಕೆ ಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ :ವಇ 158 ಹೆಚ್‌ಎಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು